

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ-ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1058

ಸದಸ್ಯರ ಹೆಸರು : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)

ಉತ್ತರಿಸಬೇಕಾದ ದಿನಾಂಕ : 21-09-2021

ಉತ್ತರಿಸುವ ಸಚಿವರು : ಮಾನ್ಯ ನಗರಾಭಿವೃದ್ಧಿ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಸಣ್ಣ ಮತ್ತು ಮಧ್ಯಮ ಪಟ್ಟಣಗಳೆಂದು ಗುರುತಿಸಿರುವ ಸಂಖ್ಯೆ ಎಷ್ಟು; ಇವುಗಳನ್ನು ಯಾವ ಆಧಾರದ ಮೇಲೆ ಗುರುತಿಸಲಾಗಿದೆ; (ಪೂರ್ಣ ವಿವರ ನೀಡುವುದು) | ರಾಜ್ಯದಲ್ಲಿನ ನಗರ ಸ್ಥಳೀಯ ಸಂಸ್ಥೆಗಳನ್ನು ಸಣ್ಣ ಮತ್ತು ಮಧ್ಯಮ ಪಟ್ಟಣಗಳೆಂದು ಪ್ರತ್ಯೇಕವಾಗಿ ಗುರುತಿಸಿರುವುದಿಲ್ಲ.<br><br>ಜನಸಂಖ್ಯೆ 10,000 ದಿಂದ 20,000 ಇರುವ ಪಟ್ಟಣಗಳನ್ನು ಪಟ್ಟಣ ಪಂಚಾಯಿತಿಗಳೆಂದು, 20,000 ದಿಂದ 50,000 ವರೆಗಿನ ಜನಸಂಖ್ಯೆ ಇರುವ ಪಟ್ಟಣಗಳನ್ನು ಪುರಸಭೆಗಳೆಂದು, 50,000 ದಿಂದ 3 ಲಕ್ಷ ಜನಸಂಖ್ಯೆ ಇರುವ ನಗರಗಳನ್ನು ನಗರಸಭೆಗಳೆಂದು ಮತ್ತು 3 ಲಕ್ಷಕ್ಕಿಂತ ಮೇಲ್ಪಟ್ಟ ಜನಸಂಖ್ಯೆ ಇರುವ ನಗರಗಳನ್ನು ಮಹಾನಗರಪಾಲಿಕೆಗಳೆಂದು ವರ್ಗೀಕರಿಸಲಾಗಿದೆ.<br><br>**ನಗರ ಸ್ಥಳೀಯ ಸಂಸ್ಥೆ ವರ್ಗ** — **ಸಂಖ್ಯೆ**<br>ಮಹಾನಗರಪಾಲಿಕೆಗಳು (ಬಿ.ಬಿ.ಎಂ.ಪಿ. ಹೊರತುಪಡಿಸಿ) — 10<br>ನಗರಸಭೆಗಳು — 61<br>ಪುರಸಭೆಗಳು — 122<br>ಪಟ್ಟಣ ಪಂಚಾಯಿತಿಗಳು — 116<br>ಒಟ್ಟು — **309** |
| ಆ) | ರಾಜ್ಯದಲ್ಲಿ ಗುರುತಿಸಿರುವ ಸಣ್ಣ ಮತ್ತು ಮಧ್ಯಮ ಪಟ್ಟಣಗಳ ಅಭಿವೃದ್ಧಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ರೂಪಿಸಿರುವ ಯೋಜನೆಗಳು ಯಾವುವು; | **1) ಸಣ್ಣ ಮತ್ತು ಮಧ್ಯಮ ಪಟ್ಟಣಗಳ ಅಭಿವೃದ್ಧಿಗೆ ಕೇಂದ್ರ ಸರ್ಕಾರದಿಂದ ರೂಪಿಸಿರುವ ಯೋಜನೆಗಳು:**<br>1. ಯು.ಐ.ಡಿ.ಎಸ್.ಎಸ್.ಎಂ.ಟಿ. ಯೋಜನೆ (ಯೋಜನಾ ಅವಧಿ: 2006-07 ರಿಂದ 2014-15):<br>2. ಅಮೃತ್ ಯೋಜನೆ (ಯೋಜನಾ ಅವಧಿ: 2015-16 ರಿಂದ 2021-22)<br>3. ಸ್ವಚ್ಛ ಭಾರತ ಅಭಿಯಾನ 1.0 (ಯೋಜನಾ ಅವಧಿ: 2015-16 ರಿಂದ 2021-22)<br>**2) ಸಣ್ಣ ಮತ್ತು ಮಧ್ಯಮ ಪಟ್ಟಣಗಳ ಅಭಿವೃದ್ಧಿಗೆ ರಾಜ್ಯ ಸರ್ಕಾರದಿಂದ ರೂಪಿಸಿರುವ ಯೋಜನೆಗಳು:**<br>ರಾಜ್ಯ ಸರ್ಕಾರವು ರಾಜ್ಯದ 10 ಮಹಾನಗರಪಾಲಿಕೆಗಳನ್ನು ಹೊರತುಪಡಿಸಿ ಎಲ್ಲಾ ನಗರಸಭೆ / ಪುರಸಭೆ / ಪಟ್ಟಣ ಪಂಚಾಯಿತಿಗಳನ್ನು ರಾಜ್ಯದ ನಗರೋತ್ಥಾನ ಯೋಜನೆಯಡಿ ಮುಖ್ಯಮಂತ್ರಿಗಳ ಸಣ್ಣ ಮತ್ತು ಮಧ್ಯಮ ಪಟ್ಟಣಗಳೆಂದು ಪರಿಗಣಿಸಿ ನಗರೋತ್ಥಾನ (ಮುನಿಸಿಪಾಲಿಟಿ) (CMSMTDP – Chief Minister Small and Medium Town Development Programme) ಅನ್ನು ರೂಪಿಸಿದೆ. |

......2

| | | |
|---|---|---|
| | | 1) ಸಿ.ಎಂ.ಎಸ್.ಎಂ.ಟಿ.ಡಿ.ಪಿ. –<br>ನಗರೋತ್ಥಾನ ಹಂತ-1 (ಯೋಜನಾ ಅವಧಿ: 2009-10 ರಿಂದ 2011-12)<br>ನಗರೋತ್ಥಾನ ಹಂತ-2, (ಯೋಜನಾ ಅವಧಿ: 2012-13 ರಿಂದ 2014-15)<br>ನಗರೋತ್ಥಾನ ಹಂತ-3 (ಯೋಜನಾ ಅವಧಿ: 2017-18 ರಿಂದ 2020-21) |
| ಇ) | ರಾಜ್ಯದಲ್ಲಿನ ಸಣ್ಣ ಮತ್ತು ಮಧ್ಯಮ ಪಟ್ಟಣಗಳ ಪೈಕಿ ರಾಜ್ಯ ಸರ್ಕಾರ ವಿಶೇಷ ಯೋಜನೆಯಡಿ ಕರ್ನಾಟಕ ನಗರ ಮೂಲಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ನಿಗಮ ನಿಯಮಿತ (KUIDFC) ವತಿಯಿಂದ ಆಯ್ದುಕೊಂಡಿರುವ 9 ಪಟ್ಟಣಗಳು ಯಾವುವು; ಈ ಆಯ್ಕೆಯಲ್ಲಿ ಅಳವಡಿಸಿಕೊಂಡಿರುವ ವಿಧಾನ ಮತ್ತು ಮಾರ್ಗಸೂಚಿಗಳು ಯಾವುದು; (ಪೂರ್ಣ ವಿವರ ನೀಡುವುದು) | • ಕರ್ನಾಟಕ ಸರ್ಕಾರವು ಪರಿಷ್ಕೃತ ಸರ್ಕಾರಿ ಆದೇಶ ಸಂಖ್ಯೆ: ನ.ಅ.ಇ 14 ಪಿಆರ್‌ಜೆ 2012, ಬೆಂಗಳೂರು, ದಿನಾಂಕ 15.12.2017 **ರಲ್ಲಿ 9 ಪಟ್ಟಣಗಳಿಗೆ ರೂ.205.87 ಕೋಟಿ ಅಂದಾಜು ವೆಚ್ಚದಲ್ಲಿ ನೀರು ಸರಬರಾಜು ಯೋಜನೆ ಅನುಷ್ಠಾನಕ್ಕೆ ಮಂಜೂರಾತಿ ನೀಡಿದೆ.**<br>• 9 ಪಟ್ಟಣಗಳ ಯೋಜನೆಯಡಿಯಲ್ಲಿ ಹಾಲಿ ಇರುವ ಕುಡಿಯುವ ನೀರಿನ ಯೋಜನೆಯ ಉನ್ನತೀಕರಣ ಕಾಮಗಾರಿಯನ್ನು ಮುಲ್ಕಿ, ಕಂಪ್ಲಿ, ತೆಕ್ಕಲಕೋಟೆ, ಕೊಟ್ಟೂರು, ಮಹಾಲಿಂಗಪುರ, ತೇರದಾಳ, ಮುದಗಲ್, ಮುಂಡರಗಿ ಮತ್ತು ಕೆ.ಆರ್ ಪೇಟೆ ಪಟ್ಟಣಗಳಿಗೆ ಕೈಗೊಳ್ಳಲು ಆಯ್ಕೆ ಮಾಡಲಾಗಿದೆ.<br>• ನೀರು ಸರಬರಾಜು ಉನ್ನತೀಕರಣ ಯೋಜನೆಯ ಕಾಮಗಾರಿಯನ್ನು ಕರ್ನಾಟಕ ಸರ್ಕಾರದ ಶೇ. 50ರಷ್ಟು ಅನುದಾನ ಮತ್ತು ಶೇ. 50ರಷ್ಟು ಮಾರುಕಟ್ಟೆ ಸಾಲದಿಂದ ಅನುಷ್ಠಾನಗೊಳಿಸಲಾಗುತ್ತಿದೆ.<br>• ಯಾವುದೇ ಬಾಹ್ಯ ನೆರವಿನ ಯೋಜನೆಗೆ ಒಳಪಡದ ಹಾಗೂ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು 2010-11 ಮತ್ತು 2011-12 ರ ಕ್ರಿಯಾ ಯೋಜನೆಗೆ ಒಳಪಡದ ಪಟ್ಟಣಗಳನ್ನು ಸದರಿ ಯೋಜನೆಗೆ ಆಯ್ಕೆ ಮಾಡಲಾಗಿದೆ.<br>• ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಯು.ಡಿ.ಡಿ 14 ಪಿ.ಆರ್.ಜೆ 2012, ಬೆಂಗಳೂರು, ದಿನಾಂಕ: 20.11.2012 ರಲ್ಲಿ 16 ಪಟ್ಟಣಗಳಿಗೆ (ಮುಲ್ಕಿ, ಕಂಪ್ಲಿ, ತೆಕ್ಕಲಕೋಟೆ, ಕೊಟ್ಟೂರು, ಮಹಾಲಿಂಗಪುರ, ತೇರದಾಳ, ಮುದಗಲ್, ಮುಂಡರಗಿ, ಆಳ್ನಾವರ, ನರೇಗಲ್, ಬಂಕಾಪುರ, ಗಜೇಂದ್ರಗಡ, ಮೊಳಕಾಲ್ಮೂರು, ಶಿರಾಳಕೊಪ್ಪ, ಕುಡಚಿ ಮತ್ತು ಕಮಲಾಪುರ) ರೂ. 205.87 ಕೋಟಿ ಅಂದಾಜು ವೆಚ್ಚದಲ್ಲಿ ನೀರು ಸರಬರಾಜು ಮತ್ತು ಒಳಚರಂಡಿ ಯೋಜನೆ ಅನುಷ್ಠಾನಕ್ಕೆ ಮಂಜೂರಾತಿ ನೀಡಿದೆ. |

...3

| | | |
|---|---|---|
| | | • 16 ಪಟ್ಟಣಗಳ ಪೈಕಿ, ಕೆಯುಡಬ್ಲ್ಯೂಎಸ್‌ಡಿಬಿ ರವರಿಂದ ಆಳ್ನಾವರ, ನರೇಗಲ್, ಬಂಕಾಪುರ, ಹಾಗೂ ಗಜೇಂದ್ರಗಡ ಪಟ್ಟಣಗಳಲ್ಲಿ ನೀರು ಸರಬರಾಜು ಯೋಜನೆ ಅನುಷ್ಠಾನಗೊಳ್ಳುತ್ತಿರುವುದರಿಂದ ಹಾಗೂ ಆರ್‌ಡಿಪಿಆರ್ ಇಲಾಖೆಯಿಂದ ಮೊಳಕಾಲ್ಮೂರು ಪಟ್ಟಣಕ್ಕೆ ನೀರು ಸರಬರಾಜು ಯೋಜನೆ ಕೈಗೆತ್ತಿಕೊಂಡಿರುವುದರಿಂದ ಹಾಗೂ ಕುಡಚಿ ಮತ್ತು ಕಮಲಾಪುರ ಪಟ್ಟಣಗಳ ನಗರ ಸ್ಥಳೀಯ ಸಂಸ್ಥೆಗಳ ಪ್ರತಿನಿಧಿಗಳು ಸದರಿ ಪಟ್ಟಣಗಳಲ್ಲಿ ನೀರಿನ ಸರಬರಾಜು ಸಾಕಷ್ಟು ಪ್ರಮಾಣದಲ್ಲಿರುವುದರಿಂದ 16 ಪಟ್ಟಣಗಳ ಯೋಜನೆಯಿಂದ ಹೊರಗಿರಲು ನಿರ್ಧರಿಸಿದ ಕಾರಣ 16 ಪಟ್ಟಣಗಳ ಪೈಕಿ 9 ಪಟ್ಟಣಗಳಿಗೆ (ಮುಲ್ಕಿ, ಕಂಪ್ಲಿ, ತೆಕ್ಕಲಕೋಟೆ, ಕೊಟ್ಟೂರು, ಮಹಾಲಿಂಗಪುರ, ತೇರದಾಳ, ಮುದಗಲ್, ಮುಂಡರಗಿ ಮತ್ತು ಶಿರಾಳಕೊಪ್ಪ) ಕುಡಿಯುವ ನೀರು ಸರಬರಾಜು ಯೋಜನೆಗೆ ಸರ್ಕಾರವು ರೂ.205.87 ಕೋಟಿಗಳಿಗೆ ಸರ್ಕಾರದ ಆದೇಶ ಸಂಖ್ಯೆ:ಯು.ಡಿ.ಡಿ 14 ಪಿ.ಆರ್.ಜೆ 2012 ದಿನಾಂಕ: 06.04.2017ರಲ್ಲಿ ಮಂಜೂರಾತಿ ನೀಡಲಾಗಿರುತ್ತದೆ.<br>• ಮುಂದುವರೆದು ಶಿರಾಳಕೊಪ್ಪ ಪಟ್ಟಣಕ್ಕೆ ನಿರಂತರ ನೀರಿನ ಲಭ್ಯತೆವಿಲ್ಲದ ಕಾರಣ ಶಿರಾಳಕೊಪ್ಪ ಪಟ್ಟಣದ ಬದಲಾಗಿ ಕೆ.ಆರ್ ಪೇಟೆ ಪಟ್ಟಣವನ್ನು ಸರ್ಕಾರದ ಆದೇಶ ಸಂಖ್ಯೆ:ಯು.ಡಿ.ಡಿ 381 ಪಿ.ಆರ್.ಜೆ 2017 ದಿನಾಂಕ: 15.12.2017 ರಲ್ಲಿ ಮಂಜೂರಾತಿ ನೀಡಲಾಗಿರುತ್ತದೆ. |
| ಈ) | ಈ ವಿಶೇಷ ಯೋಜನೆ ವ್ಯಾಪ್ತಿಯಲ್ಲಿ ಸಂಪನ್ಮೂಲ ಕ್ರೋಢೀಕರಣ, ಅನುಷ್ಠಾನ, ತಹಲ್‌ವರೆಗೂ ಸಾಧಿಸಲಾಗಿರುವ ಸುಧಾರಣೆ ಮತ್ತು ಪ್ರಗತಿಯ ಸಂಪೂರ್ಣ ವಿವರಗಳನ್ನು ಒದಗಿಸಲಾಗುವುದೇ? | • 9 ಪಟ್ಟಣಗಳಲ್ಲಿ ಕುಡಿಯುವ ನೀರಿನ ಯೋಜನೆಯ ಒಟ್ಟು ಮೊತ್ತ ರೂ.205.87 ಕೋಟಿಗಳ ಪೈಕಿ ರೂ.102.935 ಕೋಟಿಗಳು (ಶೇಕಡ 50 ರಷ್ಟು) ಮೊತ್ತವನ್ನು ಕರ್ನಾಟಕ ಸರ್ಕಾರದ ಅನುದಾನದಿಂದ ಹಾಗೂ ರೂ.102.935 ಕೋಟಿಗಳು (ಶೇಕಡ 50 ರಷ್ಟು) ಮೊತ್ತವನ್ನು ಮಾರುಕಟ್ಟೆ ಸಾಲದಿಂದ ಭರಿಸಲಾಗುವುದು.<br>• ಯೋಜನೆಯ ಅನುಷ್ಠಾನಕ್ಕೆ ಸರ್ಕಾರದ ಶೇ.50ರಷ್ಟು ಅನುದಾನಕ್ಕೆ ಇಲ್ಲಿಯವರೆಗೆ ರೂ.95.97 ಕೋಟಿಗಳು ಬಿಡುಗಡೆಯಾಗಿದ್ದು, ರೂ.82.17 ಕೋಟಿ ವೆಚ್ಚವಾಗಿದೆ.<br>• ಉಳಿದ ಶೇ. 50ರಷ್ಟು ಮೊತ್ತವನ್ನು ಮಾರುಕಟ್ಟೆ ಸಾಲದಿಂದ ಪಡೆಯಲು ಕ್ರಮಕೈಗೊಳ್ಳಲಾಗುತ್ತಿದೆ.<br>• ಪ್ರಗತಿಯ ಸಂಪೂರ್ಣ ವಿವರ **ಅನುಬಂಧದಲ್ಲಿ** ನೀಡಿದೆ. |

ಕಡತ ಸಂಖ್ಯೆ:ನಅಇ 79 ಸಮಸ 2021

(ಬಿ.ಎ. ಬವಸರಾಜ)
ಮಾನ್ಯ ನಗರಾಭಿವೃದ್ಧಿ ಸಚಿವರು

ಅನುಬಂಧ

ಕರ್ನಾಟಕದ 9 ಪಟ್ಟಣಗಳಲ್ಲಿ ನೀರು ಸರಬರಾಜು ಯೋಜನೆಯ ಪ್ರಗತಿ ವಿವರ

(ರೂ. ಕೋಟಿಗಳಲ್ಲಿ)

| ಕ್ರ. ಸಂ. | ಜಿಲ್ಲೆ | ನಗರ ಸ್ಥಳೀಯ ಸಂಸ್ಥೆ | ಪುರಸಭೆ / ಪಟ್ಟಣ ಪಂಚಾಯತಿ | ಕರ್ನಾಟಕ ಸರ್ಕಾರದ ಶೇ. 50ರಷ್ಟು ಅನುದಾನ ಮತ್ತು ಶೇ. 50ರಷ್ಟು ಮಾರುಕಟ್ಟೆ ಸಾಲ (ರೂ.ಕೋಟಿ) | ಸರ್ಕಾರದಿಂದ ಬಿಡುಗಡೆಯಾಗಿರುವ ಮೊತ್ತ | ವೆಚ್ಚ (31.08.2021) ರವರೆಗೆ | ಷರಾ |
|---|---|---|---|---|---|---|---|
| 1 | ಗದಗ | ಮುಂಡರಗಿ | ಪುರಸಭೆ | 19.56 | 95.97 | 3.38 | ಗುತ್ತಿಗೆದಾರರಾದ ಮೇ॥ ಎ.ಎಸ್.ಆರ್ ಇಂಜನಿಯರಿಂಗ್ & ಪ್ರಾಜೆಕ್ಟ್ಸ್ ಲಿಮಿಟೆಡ್, ಹೈದರಾಬಾದ್ ರವರಿಗೆ ವಹಿಸಿರುವ 6 ಪಟ್ಟಣಗಳ ಪ್ರಗತಿ ಕುಂಠಿತವಾಗಿರುತ್ತದೆ. |
| 2 | ಬಳ್ಳಾರಿ | ತೆಕ್ಕಲಕೋಟೆ | ಪಟ್ಟಣ ಪಂಚಾಯತಿ | 27.52 | | 8.45 | |
| 3 | ಬಳ್ಳಾರಿ | ಕೊಟ್ಟೂರು | ಪಟ್ಟಣ ಪಂಚಾಯತಿ | 31.16 | | 5.12 | |
| 4 | ಬಾಗಲಕೋಟೆ | ಮಹಾಲಿಂಗಪುರ | ಪುರಸಭೆ | 11.07 | | 4.74 | |
| 5 | ಬಾಗಲಕೋಟೆ | ತೆರೆದಾಳ | ಪುರಸಭೆ | 17.72 | | 4.88 | |
| 6 | ರಾಯಚೂರು | ಮುದಗಲ್ | ಪುರಸಭೆ | 34.96 | | 6.44 | |
| 7 | ದಕ್ಷಿಣ ಕನ್ನಡ | ಮುಲ್ಕಿ | ಪಟ್ಟಣ ಪಂಚಾಯತಿ | 15.35 | | 17.10 | ಟ್ರಯಲ್ ರನ್ ಪೂರ್ಣಗೊಂಡಿದೆ. ಪಣಂಬೂರ್ ಡಬ್ಲ್ಯೂ.ಟಿ.ಪಿ ಯಿಂದ 3 ಎಂ.ಎಲ್.ಡಿ ನೀರನ್ನು ಎಂ.ಸಿ.ಸಿ ಒದಗಿಸಿದರೆ ಕಮಿಷನಿಂಗ್ ಮಾಡಬಹುದಾಗಿದೆ. |
| 8 | ಬಳ್ಳಾರಿ | ಕಂಪ್ಲಿ | ಪುರಸಭೆ | 20.78 | | 25.35 | ಟ್ರಯಲ್ ರನ್ ಪೂರ್ಣಗೊಂಡಿದೆ. |
| 9 | ಮಂಡ್ಯ | ಕೆ.ಆರ್.ಪೇಟೆ | ಪುರಸಭೆ | 27.75 | | 6.69 | ಪ್ರಗತಿಯಲ್ಲಿರುತ್ತದೆ |
| | | | ಒಟ್ಟು | 205.87 | 95.97 | 82.17 | |

ವ್ಯವಸ್ಥಾಪಕ ನಿರ್ದೇಶಕರು,
ಕೆಯುಐಡಿಎಫ್‌ಸಿ, ಬೆಂಗಳೂರು.